ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

## ನೂರ ಮೂವತ್ತೆಂಟನೆಯ ಅಧಿವೇಶನ

## ಬುಧವಾರ, ದಿನಾಂಕ : 24ನೇ ಜುಲೈ, 2019

14. ಅಕ್ರಮ ಒತ್ತುವರಿ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) :-

569(616) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ದಕ್ಷಿಣ ತಾಲ್ಲೂಕಿನ ಬೇಗೂರು ಹೋಬಳಿಯ ಹುಳಿಮಾವು ಗ್ರಾಮದ ಸರ್ವೇ 63 ರಲ್ಲಿ 5 ಎಕರೆ ಜಾಗವನ್ನು ಒತ್ತುವರಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಒತ್ತುವರಿ ಮಾಡಿರುವವರ ಹೆಸರು ಮತ್ತು ವಿಳಾಸ ದೊಂದಿಗೆ ವಿವರ ನೀಡುವುದು ;

(ಆ) ಸದರಿ ಜಾಗವನ್ನು ಒತ್ತುವರಿ ಮಾಡಿರುವುದನ್ನು ತೆರವುಗೊಳಿಸಿದ ಕುರಿತು ಆದೇಶವಾಗಿದ್ದರೂ ಸರ್ಕಾರದ ವಶಕ್ಕೆ ಪಡೆಯದಿರಲು ಕಾರಣವೇನು ;

(ಇ) ಈ ರೀತಿಯಾಗಿ ಅಕ್ರಮ ಒತ್ತುವರಿಗೆ ಸಹಕರಿಸಿ ಅನಧಿಕೃತ ಕಟ್ಟಡ ನಿರ್ಮಾಣವಾಗುವವರೆಗೆ ಸಹಕರಿಸಿದ ಯಾವ ಅಧಿಕಾರಿಗಳನ್ನು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಇದುವರೆಗೆ ಅಮಾನತ್ತುಗೊಳಿಸಿ ಶಿಕ್ಷೆಗೆ ಒಳಪಡಿಸಲಾಗಿದೆ ; (ಹೆಸರು ಹುದ್ದೆಯೊಂದಿಗೆ ವಿವರ ನೀಡುವುದು)

(ಈ) ಈ ಅಕ್ರಮ ಒತ್ತುವರಿದಾರರನ್ನು ತೆರವುಗೊಳಿಸುವ ಬಗ್ಗೆ ಸರ್ಕಾರದ ನಿಲುವೇನು ; ಅಕ್ರಮ ಒತ್ತವರಿದಾರರನ್ನು ಯಾವಾಗ ತೆರವುಗೊಳಿಸಿ ಅಕ್ರಮ ಕಟ್ಟಡವನ್ನು ನೆಲ ಸಮಗೊಳಿಸಲಾಗುವುದು ; ಈ ಅಕ್ರಮವು ಕಾನೂನು ಸುವ್ಯವಸ್ಥೆಗೆ ತೊಂದರೆ ಉಂಟು ಮಾಡಲು ಕಾರಣವಾದರೆ ಅದಕ್ಕೆ ಜವಾಬ್ದಾರರು ಯಾರು ; ಒತ್ತುವರಿ ಜಾಗವನ್ನು ತೆರವುಗೊಳಿಸಿ ಜಾಗವನ್ನು ಸರ್ಕಾರದ ವಶಕ್ಕೆ ಪಡೆಯದ ಜಿಲ್ಲಾಧಿಕಾರಿಯವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ ; ಕ್ರಮ ಕೈಗೊಳ್ಳದಿರಲು ಕಾರಣವೇನು ?